ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 08 ನೇ ಡಿಸೆಂಬರ್, 2020

ಬಯಲು ಸೀಮೆಯ ಹೊಸ ಪ್ರದೇಶಗಳಲ್ಲಿ ತೋಟಗಾರಿಕಾ ವಿಸ್ತರಣೆ ಕುರಿತು

ಡಾ|| ತೇಜಸ್ವಿನಿಗೌಡ (ವಿಧಾನಸಭೆಯಿಂದ ಚುನಾಯಿತರಾದವರು):-

140 (165) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದ ಯಾವ ಯಾವ ಜಿಲ್ಲೆಗಳ ರೈತರು ಯಾವ ಯಾವ ರೀತಿಯ ಬೆಳೆಗಳಿಗೆ ತೋಟಗಾರಿಕೆ ಬೆಳೆಗಳ ಕೃಷಿಯ ಮೇಲೆ ಅವಲಂಬಿತರಾಗಿದ್ದಾರೆ ;

(ಆ) ತೋಟಗಾರಿಕೆಯಿಂದ ಎಷ್ಟು ಪ್ರಮಾಣದ ಆರ್ಥಿಕ ಸ್ವಾವಲಂಬನೆ ಸಾಧಿಸಲಾಗಿದೆ ;

(ಇ) ಈ ರೈತ ಸಮುದಾಯಕ್ಕೆ ಯಾವ ಯಾವ ರೀತಿಯ ಸಾಲ ಸೌಲಭ್ಯಗಳನ್ನು, ರಿಯಾಯಿತಿಗಳನ್ನು ಒದಗಿಸಲಾಗುತ್ತಿದೆ; ಮಹಿಳಾ ರೈತರಿಗೆ ಆದ್ಯತೆ ನೀಡಲಾಗಿದೆಯೇ ;

(ಈ) ಬಯಲು ಸೀಮೆಯ ಯಾವ ಯಾವ ಜಿಲ್ಲೆಗಳಲ್ಲಿ ತೋಟಗಾರಿಕೆಯು ಪರಿಣಾಮಕಾರಿ ಜೀವನೋಪಾಯವಾಗಿದೆ; ಎಷ್ಟು ಹೊಸ ಪ್ರದೇಶದಲ್ಲಿ ತೋಟಗಾರಿಕೆಯನ್ನು ರೈತರು ವಿಸ್ತರಿಸಿದ್ದಾರೆ ? (ವಿವರವಾದ ಮಾಹಿತಿ ನೀಡುವುದು)